# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1585 |
| 2 | ಸದಸ್ಯರ ಹೆಸರು | : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : 24.09.2021 |
| 4 | ಉತ್ತರಿಸುವ ಸಚಿವರು | : ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು. |

*****

| | ಪ್ರಶ್ನೆ | ಉತ್ತರ |
|---|---|---|
| (ಅ) | ಮೈಸೂರು ಜಿಲ್ಲೆಯಲ್ಲಿ 2020-2021 ಮತ್ತು 2021-22ನೇ ಸಾಲಿನಲ್ಲಿ ಪಿ.ಡಿ. ಖಾತೆಯಲ್ಲಿರುವ ಅನುದಾನವನ್ನು ಶಾಸಕರಿಗೆ ರೂ.2.00 ಕೋಟಿಯವರೆಗೂ ಬಿಡುಗಡೆ ಮಾಡುವಂತೆ ಸೂಚಿಸಿ ಸರ್ಕಾರದಿಂದ ಪತ್ರ ಬರೆಯಲಾಗಿದೆಯೇ; | ರಾಜ್ಯದ ಎಲ್ಲಾ ಜಿಲ್ಲೆಗಳಿಗೆ, ಮೈಸೂರು ಜಿಲ್ಲೆಯನ್ನೊಳಗೊಂಡಂತೆ, ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2020-21ನೇ ಸಾಲಿನಲ್ಲಿ ಎಲ್ಲಾ ಕ್ಷೇತ್ರಗಳಿಗೆ ರೂ.1.00 ಕೋಟಿಗಳಿಗೆ ಬದಲಾಗಿ ರೂ.2.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಸದರಿ ಅನುದಾನದಿಂದ ರೂ.1.00 ಕೋಟಿಗಳನ್ನು 2019-20ನೇ ಸಾಲಿಗೆ ವರ್ಗಾಯಿಸಿಕೊಂಡು ವೆಚ್ಚ ಮಾಡಲು ಆರ್ಥಿಕ ಇಲಾಖೆಯ ಸಹಮತಿಯಂತೆ, ದಿನಾಂಕ:13.08.2021 ರ ಸುತ್ತೋಲೆಯಲ್ಲಿ ನಿರ್ದೇಶನವನ್ನು ನೀಡಲಾಗಿದೆ. |
| (ಆ) | ಬರೆಯದಿದ್ದಲ್ಲಿ, ಸದರಿ ವರ್ಷಗಳಲ್ಲಿ ಎಷ್ಟು ಮೊತ್ತದ ಕಾಮಗಾರಿಗಳಿಗೆ ಅನುಮೋದನೆ ನೀಡುವಂತೆ ಸೂಚಿಸಲಾಗಿದೆ; | ಸದರಿ ವರ್ಷಗಳಲ್ಲಿ ಈ ಕೆಳಕಂಡ ಮೊತ್ತಕ್ಕೆ ಅನುಮೋದನೆ ನೀಡಲು ಸೂಚಿಸಲಾಗಿದೆ.<br><br>1. 2020-21ನೇ ಸಾಲಿನಲ್ಲಿ ರೂ.1.00 ಕೋಟಿಗಳು.<br>2. 2021-22ನೇ ಸಾಲಿನಲ್ಲಿ 2.00 ಕೋಟಿಗಳು. |
| (ಇ) | ಪತ್ರ ಬರೆಯಲಾಗಿದ್ದಲ್ಲಿ, ಇಲ್ಲಿಯವರೆಗೂ ಎಷ್ಟು ಶಾಸಕರು ನೀಡಿದ ರೂ.2.00 ಕೋಟಿಯವರೆಗಿನ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಲಾಗಿದೆ; ಅನುದಾನ ಬಿಡುಗಡೆ ಮಾಡದಿದ್ದಲ್ಲಿ; ಮಾಡದಿರಲು ಕಾರಣಗಳೇನು; | ಸುತ್ತೋಲೆ ಸಂಖ್ಯೆ:ಪಿಡಿಎಸ್ 82 ಕೆಎಲ್‌ಎಸ್ 2020, ದಿನಾಂಕ:13.08.2021 ರಂತೆ, ಮಾನ್ಯ ವಿಧಾನ ಸಭಾ ಮತ್ತು ಮಾನ್ಯ ವಿಧಾನ ಪರಿಷತ್ ಸದಸ್ಯರಿಂದ ತಲಾ ರೂ.2.00 ಕೋಟಿ ಮೊತ್ತಕ್ಕೆ ಕ್ರಿಯಾ ಯೋಜನೆ ಪಡೆದು, ಕಾಮಗಾರಿಗಳ ಅನುಷ್ಠಾನಕ್ಕೆ ಕ್ರಮವಹಿಸಲು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ. |

ಸಂಖ್ಯೆ: ಪಿಡಿಎಸ್ 95 ಕೆಎಲ್‌ಎಸ್ 2021

(ಮುನಿರತ್ನ)
ಸಚಿವರು
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

## ಕರ್ನಾಟಕ ಸರ್ಕಾರ

**ಸಂಖ್ಯೆ:** ಪಿಡಿಎಸ್/82/ ಕೆಎಲ್ಎಸ್/2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:13.08.2021

## ಸುತ್ತೋಲೆ

ದಿನಾಂಕ:03.08.2021ರಂದು ಮಾನ್ಯ ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್- ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ (KLLADS) ಪೂರ್ಣ ಅನುದಾನ ಬಿಡುಗಡೆ ಮಾಡುವುದು ಹಾಗೂ 2021-22ನೇ ಸಾಲಿಗೆ ರೂ.1.00 ಕೋಟಿ ಬದಲು ರೂ.2.00 ಕೋಟಿಗಳ ಅನುದಾನವನ್ನು ಮಂಜೂರು ಮಾಡುವ ಬಗ್ಗೆ ಮತ್ತು ನಿಗದಿತ ಅವಧಿಯಲ್ಲಿ ಕಾಮಗಾರಿಗಳನ್ನೊಳಗೊಂಡ ಕ್ರಿಯಾ ಯೋಜನೆ ರೂಪಿಸಿ, ಅನುಷ್ಠಾನಗೊಳಿಸುವುದು ಹಾಗೂ ಎರಡು ವರ್ಷಕ್ಕಿಂತ ಅವಧಿ ಮೀರಿದ ಕಾಮಗಾರಿಗಳ ಅನುದಾನವನ್ನು ಸರ್ಕಾರಕ್ಕೆ ಎಂಪಿಲ್ಯಾಡ್ಸ್ ಮಾದರಿಯಲ್ಲಿ ಅಧ್ಯರ್ಪಣೆ ಮಾಡುವ ಬಗ್ಗೆ ವಿಸ್ತೃತವಾಗಿ ಚರ್ಚಿಸಲಾಯಿತು ಹಾಗೂ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಲು ನಿರ್ಧರಿಸಲಾಯಿತು ಈ ಕುರಿತು ಆರ್ಥಿಕ ಇಲಾಖೆಯು ದಿನಾಂಕ:09.08.2021ರಂದು ಹಿಂಬರಹ ನೀಡಿದ್ದು, ಸದರಿ ಹಿಂಬರಹದಂತೆ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು /ಉಪ ವಿಭಾಗಾಧಿಕಾರಿಗಳು ಸೂಕ್ತ ಕ್ರಮವಹಿಸಿಲು ತಿಳಿಸಲಾಗಿದೆ.

1. 2021-22ನೇ ಸಾಲಿಗೆ ರೂ.2.00 ಕೋಟಿಗಳಿಗೆ ಕ್ರಿಯಾಯೋಜನೆ ತಯಾರಿಸಲು ಸಹಮತಿ ನೀಡಿದೆ. ಆದ್ದರಿಂದ ಕೂಡಲೇ ಎಲ್ಲಾ ಜಿಲ್ಲಾಧಿಕಾರಿಗಳು ರೂ.2.00ಕೋಟಿಗಳಿಗೆ ಕ್ರಿಯಾಯೋಜನೆ ರೂಪಿಸಿ ಅನುಮೋದನೆ ನೀಡುವುದು.
2. KLLADS ಮಾರ್ಗಸೂಚಿಗಳ ಕಂಡಿಕೆ 3.2 ರ ಅನುಸಾರ ಕ್ರಿಯಾ ಯೋಜನೆಯನ್ನು ಪ್ರತಿ ವರ್ಷ ಜೂನ್ ಅಂತ್ಯದೊಳಗೆ ಅಂತಿಮಗೊಳಿಸತಕ್ಕದ್ದು. ಕಾಮಗಾರಿಗಳ ಪ್ರಗತಿಗೆ ಅನುಗುಣವಾಗಿ ಸರ್ಕಾರದಿಂದ ಜಿಲ್ಲೆಗೆ ಒಟ್ಟಾರೆ ಬಿಡುಗಡೆಯಾಗಿರುವ/ಬಿಡುಗಡೆಯಾಗುವ **(ಶಾಸಕರುವಾರು ಬಿಡುಗಡೆಯಾಗುವುದಿಲ್ಲ)** ಅನುದಾನದಲ್ಲಿ ಭರಿಸತಕ್ಕದ್ದು.
3. ಇನ್ನೂ ಮುಂದೆ ಯೋಜನಾ ಇಲಾಖೆಯು ಅನುದಾನವನ್ನು ಕ್ಷೇತ್ರವಾರು ಬಿಡುಗಡೆ ಮಾಡುವ ಬದಲಾಗಿ ಜಿಲ್ಲಾವಾರು ಬಿಡುಗಡೆ ಮಾಡಲು ಕ್ರಮವಹಿಸುತ್ತದೆ. ಆದ್ದರಿಂದ ಜಿಲ್ಲಾಧಿಕಾರಿಗಳು/ಉಪವಿಭಾಗಾಧಿಕಾರಿ ಲಭ್ಯವಿರುವ ಅನುದಾನವನ್ನು ಪ್ರತಿ ಕ್ಷೇತ್ರಕ್ಕೆ ರೂ.2.00ಕೋಟಿಗಳ ಮಿತಿಯಲ್ಲಿ ಕಾಮಗಾರಿಗಳ ಪ್ರಗತಿ ಆಧರಿಸಿ ಹಣ ಪಾವತಿಸಲು ಸೂಕ್ತ ಕ್ರಮವಹಿಸುವುದು.
4. 2020-21ನೇ ಸಾಲಿನಲ್ಲಿ ಪ್ರತಿ ಕ್ಷೇತ್ರಕ್ಕೆ ರೂ.1.00ಕೋಟಿಗಳಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲು ಅನುಮೋದನೆ ನೀಡಲಾಗಿತ್ತು. ಹೆಚ್ಚುವರಿಯಾಗಿ ಬಿಡುಗಡೆಯಾಗಿರುವ ಅನುದಾನ ಪ್ರತಿ ಕ್ಷೇತ್ರಕ್ಕೆ ರೂ.1.00ಕೋಟಿಯನ್ನು 2019-20ನೇ ಸಾಲಿಗೆ ವರ್ಗಾಯಿಸಿಕೊಂಡು ಕಾಮಗಾರಿಗಳನ್ನು ಶೀಘ್ರವಾಗಿ ಅನುಷ್ಠಾನಗೊಳಿಸುವುದು.

5. 2018-19ನೇ ಸಾಲಿಗೆ ಸಂಬಂಧಿಸಿದಂತೆ ಪ್ರತಿ ಕ್ಷೇತ್ರಕ್ಕೆ ಬಿಡುಗಡೆಗೆ ಬಾಕಿ ಇರುವ (ರೂ.127.69 ಕೋಟಿಗಳನ್ನು) ನಾಲ್ಕನೇ ಕಂತಿನ ಬಂಡವಾಳ ವೆಚ್ಚದ ಅನುದಾನವನ್ನು ಬಿಡುಗಡೆಗೊಳಿಸಲು ಪ್ರಸ್ತುತ ಜಿಲ್ಲಾಧಿಕಾರಿಗಳ ಪಿಡಿ ಖಾತೆಯಲ್ಲಿ ಲಭ್ಯವಿರುವ ಅನುದಾನವನ್ನು ಪೂರ್ಣವಾಗಿ ವೆಚ್ಚ ಮಾಡಿದ ನಂತರ ಅನುದಾನ ಬಿಡುಗಡೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು.
6. KLLADS ಮಾರ್ಗಸೂಚಿ ಪ್ಯಾರ 4.1 ರಂತೆ ಎರಡು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ಪ್ರಾರಂಭವಾಗದೇ ಉಳಿದಿರುವ ಕಾಮಗಾರಿಯ ಅನುದಾನವನ್ನು ಕೂಡಲೇ ರಾಜ್ಯ ಮಟ್ಟದ ಕೇಂದ್ರೀಕೃತ ಬ್ಯಾಂಕ್ ಖಾತೆಗೆ ಜಮೆಗೊಳಿಸತಕ್ಕದ್ದು.

(ಡಿ.ಚಂದ್ರಶೇಖರಯ್ಯ)
ನಿರ್ದೇಶಕರು,
ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಪ್ರದೇಶಾಭಿವೃದ್ಧಿ, ಮಂಡಳಿ ವಿಭಾಗ,
ಯೋಜನೆ ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**ಇವರಿಗೆ,**

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು-ಮುಂದಿನ ರಾಜ್ಯ ಪತ್ರದಲ್ಲಿ ಪ್ರಕಟಿಸಲು.

**ಪ್ರತಿಯನ್ನು:**

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ವಿಧಾನ ಸಭೆ / ವಿಧಾನ ಪರಿಷತ್ತಿನ ಎಲ್ಲಾ ಮಾನ್ಯ ಸದಸ್ಯರುಗಳು.
3. ಸರ್ಕಾರದ ಮುಖ್ಯ ಕಾರ್ಯದರ್ಶಿಯವರು, ವಿಧಾನಸೌಧ.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು, ವಿಧಾನಸೌಧ.
5. ಮಾನ್ಯ ಯೋಜನಾ ಸಚಿವರ ಪ್ರಧಾನ ಕಾರ್ಯದರ್ಶಿಯವರು.
6. ಮಾನ್ಯ ಸಚಿವರುಗಳ ಆಪ್ತ ಕಾರ್ಯದರ್ಶಿಗಳು.
7. ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಸಂಬಂಧಪಟ್ಟ ಉಪವಿಭಾಗಾಧಿಕಾರಿಗಳು.
8. ಎಲ್ಲಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು.
9. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಯೋಜನಾ ಇಲಾಖೆ.
10. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಯೋಜನಾ ಇಲಾಖೆ.
11. ಶಾಖಾಧಿಕಾರಿ, ಸ್ಕೀಮರ ಶಾಖೆ, ಯೋಜನಾ ಇಲಾಖೆ (ಕಾಂಪೆಂಡಿಯಮ್‌ಗೋಸ್ಕರ).
12. ಶಾಖಾ ರಕ್ಷಾ ಕಡತ / ಬಿಡಿ ಪ್ರತಿಗಳು. / ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ವೆಬ್‌ಸೈಟ್‌ಗೆ.